# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೧೫ (ಆಶ್ವಯುಜ ೨, ಶಕ ವರ್ಷ ೧೯೩೭)<br>Bengaluru, Thursday, September 24, 2015 (Aashwayuja 2, Shaka Varsha 1937) | ಸಂಚಿಕೆ ೩೯<br>Issue 39 |
|---|---|---|


## ಭಾಗ ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು ಹಾಗೂ ಕರ್ನಾಟಕ ಉಚ್ಛ ನ್ಯಾಯಾಲಯವು ಮಾಡಿದ ನಿಯಮಗಳು

### ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 426 ಪಿಪಿಇ 2014 ಬೆಂಗಳೂರು, ದಿನಾಂಕ: 28-07-2015.**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 426 ಪಿಪಿಇ 2014, ದಿನಾಂಕ: 05-03-2015ರಲ್ಲಿ ಶ್ರೀ ಕೆ.ಸಿ. ಕಾಳಿಂಗಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ , ಮೈಸೂರು ಇವರಿಗೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡಿ, 2ನೇ ಎಸಿಜೆಎಂ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಇಲ್ಲಿ ಖಾಲಿ ಇರುವ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿರುವುದನ್ನು ಮಾರ್ಪಡಿಸಿ, 9ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ಇಲ್ಲಿನ ಖಾಲಿ ಇರುವ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

**PR-500**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೇಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು-ಬಿ)

### ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 52 ಕಾಬಾನಿ 2013 ಬೆಂಗಳೂರು, ದಿನಾಂಕ: 03-07-2015.**

ಕಾರ್ಖಾನೆಗಳ ಕಾಯ್ದೆ, 1948ರ (ಕೇಂದ್ರ ಕಾಯ್ದೆ 1948) ಕಲಂ 4ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಮೆ: ಬಯೋಕಾನ್ ಬಯೋಫಾರ್ಮಾಸ್ಯೂಟಿಕಲ್ಸ್ ಲಿಮಿಟೆಡ್, ಬೆಂಗಳೂರು, ಲೈಸನ್ಸ್ ನಂ: **MYB-14761,** ಈ ಸಂಸ್ಥೆಯನ್ನು ಮೆ: ಬಯೋಕಾನ್ ಲಿಮಿಟೆಡ್, ಬೆಂಗಳೂರು, ಲೈಸೆನ್ಸ್ ನಂ: **MYB-14305,** ಈ ಸಂಸ್ಥೆಯೊಂದಿಗೆ ಒಂದುಗೂಡಿಸಲು ಈ ಕೆಳಗಿನ ಷರತ್ತುಗಳಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಅನುಮತಿ ನೀಡಿದೆ.

<u>ಷರತ್ತುಗಳು</u>

1) ಕಾರ್ಖಾನೆಯ ಆಡಳಿತ ವರ್ಗದವರು ಎರಡು ಕಾರ್ಖಾನೆಗಳ ನಿವೇಶನ ಹಾಗೂ ಎಲ್ಲಾ ಕಟ್ಟಡದ ವಿವರಗಳನ್ನು ಒಳಗೊಂಡಂತೆ ತಯಾರಿಸಲಾದ ನಕ್ಷೆಗಳನ್ನು ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರವರಿಗೆ ಸಲ್ಲಿಸಿ ಅನುಮೋದನೆ ಪಡೆದುಕೊಳ್ಳುವುದು ಹಾಗೂ ವಿಲೀನದಂತೆ ಲೈಸೆನ್ಸ್‌ನಲ್ಲಿ ಅವಶ್ಯಕ ತಿದ್ದುಪಡಿ (ಕಾರ್ಮಿಕರು ಹಾಗೂ ಅಶ್ವ ಶಕ್ತಿ/ಕಿ.ವ್ಯಾ) ಹೊಂದಲು ನಿಯಮಗಳಂತೆ ಅರ್ಜಿ ಸಲ್ಲಿಸತಕ್ಕದ್ದು.

2) ಎರಡೂ ಕಾರ್ಖಾನೆಗಳು ವಿಲೀನಗೊಳ್ಳುತ್ತಿರುವ ಪ್ರಕ್ರಿಯೆಯಿಂದ ಕೆಲಸಗಾರರಿಗೆ ಈಗಾಗಲೇ ನಿಯಮಾನುಸಾರ ಒದಗಿಸಿರುವ ಯಾವುದೇ ಸೌಲಭ್ಯ/ಸವಲತ್ತುಗಳಿಂದ ವಂಚಿತರಾಗದಂತೆ ನಿಗಾವಹಿಸುವುದು.

3) ಎರಡೂ ಕಾರ್ಖಾನೆಗಳ ಲೈಸೆನ್ಸ್ ವಿಲೀನದ ನಂತರ ಉಂಟಾಗುವ ಪರಮಾವಧಿ ಕೆಲಸಗಾರರ ಸಂಖ್ಯೆಗೆ ಅನುಗುಣವಾಗಿ ನಿಯಮದಲ್ಲಿ ಪ್ರದತ್ತವಾಗಿರುವಂತೆ ಸುರಕ್ಷತೆ, ಆರೋಗ್ಯ ಹಾಗೂ ಕಲ್ಯಾಣ ಸೌಲಭ್ಯಗಳನ್ನು ಅನುಷ್ಠಾನಕ್ಕೆ ತರತಕ್ಕದ್ದು.

4) ಕಾರ್ಖಾನೆಗಳು ವಿಲೀನಗೊಂಡಿರುವ ಹೊಸ ಹೆಸರಿನ ಸಂಸ್ಥೆಗೆ ಪ್ರಸ್ತುತವಾಗಿ ಇರುವ ಎಲ್ಲಾ ಕಾರ್ಮಿಕರ ಸೇವೆಯನ್ನು ವರ್ಗಾಯಿಸಿ ಅದನ್ನು ಮುಂದುವರೆಸುವುದು.

5) ಕಾರ್ಖಾನೆಯ ಲೈಸೆನ್ಸ್ ಸಂ: **MYB-14761** ಅನ್ನು ವಜಾಗೊಳಿಸಲು ಕಾರ್ಖಾನೆಗಳು, ಬಾಯ್ಲರ್‌ಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ, ನಿರ್ದೇಶನಾಲಯಕ್ಕೆ ಸೂಕ್ತ ಪ್ರಸ್ತಾವನೆಯನ್ನು ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬೋರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ. (ಕಾರ್ಖಾನೆ ಮತ್ತು ಬಾಯ್ಲರುಗಳು)

**PR-501**
**SC-50**

## HOME SECRETARIAT

### NOTIFICATION

### NO: HD 11 CNA 2014 Bengaluru, Dated: 11-08-2015.

The Notification No. BM/2015-16 Bkg, dated: 14-07-2015 of Films Division Ministry of Information & Broadcasting, Bengaluru is hereby republished:

**NOTIFICATION**

No.BM/2015-16 Bkg,
Films Division Government of India
Ministry of Information & Broadcasting, Bengaluru, dated: 14-07-2015.

1. The following is the brief of the final release schedule for the month of July, 2015 that has to be released in the theatrical circuits in Karnataka State by the Films Division, Ministry of Information & Broadcasting, Bengaluru:-

**FINAL RELEASE SCHEDULE FOR THE MONTH OF JULY, 2015.**

| Release Date | Title | Col/B&w | Mtrs | Synopsis | Produced by |
|---|---|---|---|---|---|
| 03.7.2015 | Story of scare crow | Col | 122.83 | This puppet animation film deals with the issue of family planning especially in rural area, emphasizing the need to have a small family in order to live happily with limited resources. | Films Division, Ministry of Information and Broadcasting, Government of India, Mumbai-400026 |
| 10.7.2015 | Don't wait until dark | Col | 116 | This 3D Computer Animation film makes an awareness amongst the people to consume electric power for necessity only. Otherwise, wastage of electricity may put us in total darkness. | |
| 17.7.2015 | Jai ho | Col | 95 | We celebrate our country's progress in all walks of life. | |
| 24.7.2015 | Let me live | Col | 129.69 | Mother Earth is the only one we have. Her destruction will be our destruction. Zero the nuclear weapons. | |

| Release Date | Title | Col/B&w | Mtrs | Synopsis | Produced by |
|---|---|---|---|---|---|
| 31.7.2015 | Save the drops | Col | 60.21 | The short film shows the consequences of wasting energy sources and emphasizes the need to save them for future needs.0000 | |

Sd /-
MA.SELVAM
Sr.Br. Manager

PR-512

By Order and in the name of the Governor of Karnataka,
**D.S. JOGOJE**
Under Secretary to Government,
Home Department. (Prison and Cinema)

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಾಇ 134 ಎಲ್‌ಎಸ್‌ಐ 2015 ಬೆಂಗಳೂರು, ದಿನಾಂಕ: 25–07–2015

ಕಾರ್ಮಿಕರ ರಾಜ್ಯ ವಿಮಾ ಕಾಯ್ದೆ, 1948ರ (ಕೇಂದ್ರ ಕಾಯ್ದೆ 1948ರ ಕಾಯ್ದೆ 34) ಕಲಂ 87ರ ಜೊತೆ ಓದಲಾದ ಕಲಂ 91 **A**ರ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಬೀಡಿ ಸಂಸ್ಥೆಗಳಿಗೆ ಕಾರ್ಮಿಕರ ರಾಜ್ಯ ವಿಮಾ ಕಾಯ್ದೆ ವ್ಯಾಪ್ತಿಯಿಂದ ದಿನಾಂಕ: 01–01–2015ರಿಂದ 31–12–2015ರ ಒಂದು ವರ್ಷದ ಅವಧಿಗೆ ಮಾತ್ರ ಸರ್ಕಾರವು ವಿನಾಯ್ತಿ ನೀಡಿ ಆದೇಶಿಸಿದೆ:–

1) ಮೆ:ಮಂಗಳೂರು ಗಣೇಶ ಬೀಡಿ ವರ್ಕ್ಸ್, ಮೈಸೂರು.
2) ಮೆ: ಆನಂದ್ ಟೊಬ್ಯಾಕೊ ಪ್ರಾಡಕ್ಟ್ಸ್ ಮಂಗಳೂರು.
3) ಮೆ:ಪ್ರಕಾಶ್ ಬೀಡೀಸ್ ಪ್ರೈ.ಲಿ., ಮಂಗಳೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಲಕ್ಷ್ಮೀದೇವಿ**
ಪೀಠಾಧಿಕಾರಿ–5, ಕಾರ್ಮಿಕ ಇಲಾಖೆ.
(ಕಾರಾವಿ ಯೋ ವೈ. ಸೇವೆಗಳು)

## LABOUR SECRETARIAT

### NOTIFICATION

### NO: LD 134 LSI 2015 Bengaluru, Dated: 25-07-2015.

In exercise of the powers conferred under Section 87 read with Section 91 A of the Employees State Insurance Act 1948 (Central Act 34 of 1948) the Government is hereby exempts under ESI Act to the following Beedi Manufacturing Companies for a period of one year i.e., from 01-01-2015 to 31-12-2015.

1) M/s. Mangalore Ganesha Beedi Works, Mysuru.
2) M/s. Anand Tobacco Products, Mangaluru.
3) M/s. Prakash Beedies Pvt. Ltd., Mangaluru.

By Order and in the name of the Governor of Karnataka,
**Lakshmidevi**
Desk Officer-5, Labour Department.
(ESIS (M) Services)

PR-502
SC-50

## ಅಲ್ಪಸಂಖ್ಯಾತರ ಕಲ್ಯಾಣ ಹಜ್ ಮತ್ತು ವಕ್ಫ್ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: MWD 106 WES 2014(P) ಬೆಂಗಳೂರು, ದಿನಾಂಕ: 01–08–2015.

ವಕ್ಫ್ ಕಾಯ್ದೆ 1995 ರ ಅಡಿಯಲ್ಲಿ ರಚಿಸಲಾಗಿರುವ ಕರ್ನಾಟಕ ರಾಜ್ಯ ವಕ್ಫ್ ನಿಯಮಗಳು 1997 ಹಾಗೂ ವಕ್ಫ್ (ತಿದ್ದುಪಡಿ) ಕಾಯ್ದೆ 2013ಕ್ಕೆ ನಿಯಮಗಳ ರಚನೆಗಾಗಿ ಸರ್ಕಾರಿ ಆದೇಶ ಸಂಖ್ಯೆ: MWD 106 WES 2014 ದಿನಾಂಕ: 07–07–2014 ರಲ್ಲಿ ರಚಿಸಲಾಗಿದ್ದ ಸಲಹಾ ಸಮಿತಿಯು

ಸಲ್ಲಿಸಿರುವ ನಿಯಮಗಳ ವರದಿಯ ಪರಿಶೀಲನೆಗಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಸಮಿತಿಗೆ ನಾಮ ನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರ.ಸಂ. | ಹೆಸರು | ಸ್ಥಾನ |
|---|---|---|
| 1 | ಡಾ. ಖಮರುಲ್ ಇಸ್ಲಾಂ<br>ಪೌರಾಡಳಿತ ಮತ್ತು ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕ ಉದ್ದಿಮೆಗಳು, ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರು. | ಅಧ್ಯಕ್ಷರು |
| 2 | ಶ್ರೀ ನಸೀರ್ ಅಹಮದ್,<br>ವಿಧಾನ ಪರಿಷತ್ ಸದಸ್ಯರು, ಮಾಜಿ ಸಚಿವರು. | ಸದಸ್ಯರು |
| 3 | ಶ್ರೀ ಕೆ.ಅಬ್ದುಲ್ ಜಬ್ಬಾರ್<br>ವಿಧಾನ ಪರಿಷತ್ ಸದಸ್ಯರು, ಮಾಜಿ ಸದಸ್ಯರು, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ. | ಸದಸ್ಯರು |
| 4 | ಶ್ರೀ ಸೈಯದ್ ಖಾಲಿದ್ ಅಹಮದ್<br>ಸದಸ್ಯರು, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ ನಂ.45, 1ನೇ ಮಹಡಿ, 5ನೇ ಮುಖ್ಯ ರಸ್ತೆ, ಜಯಮಾಲ ಎಕ್ಸ್‌ಟೆನ್ಷನ್, ಬೆಂಗಳೂರು–46 | ಸದಸ್ಯರು |
| 5 | ಶ್ರೀ ಸೈಯದ್ ಶಾ, ಮೊಹಮ್ಮದುಲ್ ಹುಸೇನಿ, ಸದಸ್ಯರು ಕರ್ನಾಟಕ ರಾಜ್ಯ ವಕ್ಫ್ ಮಂಡಳಿ | ಸದಸ್ಯರು |
| 6 | ಶ್ರೀ ನಿಸಾರ್ ಅಹಮದ್, ಪೌರಾಡಳಿತ ಮತ್ತು ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕ ಉದ್ದಿಮೆಗಳು, ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ವಿಶೇಷಾ ಕರ್ತವ್ಯಾಧಿಕಾರಿ | ಸದಸ್ಯರು |
| 7 | ಶ್ರೀ ಅದೋನಿ ಸೈಯದ್ ಸಲೀಂ<br>ಸರ್ಕಾರದ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಹಜ್ ಮತ್ತು ವಕ್ಫ್ ಇಲಾಖೆ. | ಸದಸ್ಯ ಕಾರ್ಯದರ್ಶಿ |
| 8 | ಶ್ರೀ ಅಕ್ರಂ ಪಾಷ, ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ ಹಾಗೂ ಸದಸ್ಯರು ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ವಿ.ವಿ.ಗೋಪುರ, ಬೆಂಗಳೂರು. | ಸದಸ್ಯರು |
| 9 | ಶ್ರೀ ಮಹಮೂದ್ ಪಟೇಲ್, ಹಿರಿಯ ವಕೀಲರು, ನಂ.6, 1ನೇ ಮಹಡಿ, ಎಂ.ಎಂ. ಕಾಂಪ್ಲೆಕ್ಸ್, ಚಿಕ್‌ಬಜಾರ್ ರಸ್ತೆ, ಟಸ್ಕರ್ ಟೌನ್, ಬಿಎಸ್‌ಎಪಿ ಎಜುಕೇಷನಲ್ ಟ್ರಸ್ಟ್, ಬೆಂಗಳೂರು. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಕ್ರಂ ಭಾಷ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)

ಅಲ್ಪಸಂಖ್ಯಾತರ ಕಲ್ಯಾಣ ಹಜ್ ಮತ್ತು ವಕ್ಫ್ ಇಲಾಖೆ.

**PR-503**
**SC-200**

## URBAN DEVELOPMENT SECRETARIAT

### NOTIFICATION

### NO: UDD 210 BEMAPRA 2015 Bengaluru, Dated: 29-07-2015.

In exercise of the powers conferred under Section 4-B of the Karnataka Town and Country Planning Act, 1961, the Government of Karnataka Withdraws the following villages from the Local Planning area of Dandeli notified vide notification no: LMA: 36: MNP: 66, Dated: 11-05-1966.

| Sl.No. | Name of Village | Area |
|---|---|---|
| | | **HALIYAL TALUK** |
| 1 | Barchi | Entire revenue village including goathana area |
| 2. | Konde | Do |
| 3. | Ambevadi | Part[Excluding 18,19,20.21A(part).1(part),21 B, 21 K1 (part)21 K2(part) |

| Sl.No. | Name of Village | Area |
|---|---|---|
| 4. | Vithal | Entire revenue village including Goathana area |
| 5. | Haregali | Do |
| 6. | Badakansirda | Part(excluding s.no.43(part) |
| 7. | Kugorban | Entire revenue village including Goathana area |
| 8. | Kerwad | do |
| 9. | Badsirgur | do |
| 10. | Domgira | do |
| 11. | Ajraon | do |
| 12. | Alur | do |
| 13. | Tadigere | do |
| 14. | Sivadi | do |
| 15. | Kilginhatti | do |
| 16. | Kariyampeli | do |
| 17. | Maynol | do |
| 18. | Parnod | do |
| 19. | Savasi | do |
| 20. | Chimanahalli | do |
| 21. | Rayanatan | do |
| 22. | Gdgere | do |
| 23. | Gudmargi | do |
| 24. | Gardalli | do |
| 25. | Kyatargeri | do |
| 26. | Aggalkatti | Entire revenue village including goathana area |
| 27. | Sambrani | Full survey Nos, included 18,19,20,121,17,17-A, 86 |
| 28. | Karalakatte | Full survey Nos, included 60,61,59,66,67,58,57,56,54,53,52,Part survey Nos, included 65,55 |
| 29. | Kurigadde | Full Survey No. included 11,12,13,14 |
| 30. | Kesrolli | Full Survey Nos, included19,20,21,22,23,23/1,23/2),24,25,26,27,28,29,30,31,32,33,41,42,43,44, 45,46,47,(47/1,47/2,47/3),48,49,(49/1,49/2,49/3,49/4,49/5),51,52,53,54,55,(55/ 1,55/2,55/3,55/4),56,57,58,59,(59/1,59/2),60,61,62,63,64,65,66,67,68,69,70,71, 72,73,74,75,76,77,2,3,4,5,6,7,8,9,10,11,12,13,14,15,16,17,18,1(1/1,1/2 Part survey No. included),50,(50/1,50/2,50/3,50/4) |

| Sl.No. | Name of Village | Area |
|---|---|---|
| | | **SUPATALUK** |
| 31. | Jogalpet | Entire revenue village including Goathana area |
| 32. | Usoda | do |
| 33. | Pushel(Hamlet) | do |
| 34. | Kurandi | do |
| 35. | Aveda | do |
| 36. | Kondpe | do |
| 37. | Badgund | do |
| 38. | Mavlinga | do |
| 39. | Virampali | Part [excluding S.NO.21(part)] |
| 40. | Parbhani | Entire revenue village including Goathana area |
| 41. | Bamaniya | do |
| 42. | Sonarvadi | do |
| 43. | Sonarvadi(hamlet) | do |
| 44. | Papeli | do |
| 45. | Khodli | do |
| 46. | Umse (hamlet) | do |
| 47. | Dabeli | do |
| 48. | Vili | do |
| 49. | Konadeo | do |
| 50. | Virkhol | do |
| 51. | kalvarhal | do |

And hereby declares the existing **area within Dandeli city municipal council declared vide Notification no: HUD: 366: MLR:95 Dated: 5-10-1995** as the **Revised Local Planning Area for Dandeli** for the purpose of the said Act.

Further under the provision of section 2(7) (b) of the Karnataka Town and Country Planning Act 1961, Dandeli City Municipal Council shall function as the Planning Authority for such **Revised Local Planning Area.**

All Technical opinion and Approvals accorded by the Dandeli Planning Authority according to the provisions of the Approved Master Plan (Revision-1) prior to this Notification shall be considered as valid.

The Master plan (Revision-1) and the zoning Regulations approved vide Notification no: UDD: 72:TTP: 2000, Dated: 23-06-2000 for Dandeli shall apply to the Revised Local Planning Area until the Master plan for the Revised Local Planning area is prepared and approved under Section 13(3) of the Karnataka Town and Country Planning Act, 1961.

By Order and in the name of the Governor of Karnataka,

**PR-505**

**V.RAJENDRA**

Under Secretary to Government,

Urban Development Department.

## PERSONNEL AND ADMINISTRATIVE REFORMS SECRETARIAT

### NOTIFICATION

**NO: SiAaSuYi 50 SeVuNya 2015 Bengaluru, Dated: 30-07-2015.**

In exercise of the powers conferred under section 9 of the Code of Criminal Procedure, read with section 3 of the Prevention of Corruption Act, 1988 (Central Act 49 of 1988) and in accordance with Letter No: R.O.C. GOB(I)1/2015 dated: 21-07-2015 and Notification No: GOB(I)1/2015 dated: 03-06-2015 of the Registrar General, High Court of Karnataka, the Government of Karnataka hereby concurrently appoints, Sri. Ashwathanarayana, XLVII Additional City Civil and Sessions Judge, Bengaluru City, as the Presiding Officer of the Court of XXXVI Additional City Civil and Sessions Judge, Bengaluru City (Special Court for trial of Cases filed against Miss. Jayalalitha) with immediate effect and until further orders.

By Order and in the name of the Governor of Karnataka,

**PR-506**

**Dr. Geetha.L**
Under Secretary to Government
Department of Personnel and Administrative Reforms
(Services-3)

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಆರ್‌ಡಿ:17:ಎಲ್‌ಜಿಜಿ 2014 ಬೆಂಗಳೂರು, ದಿನಾಂಕ: 29-07-2015**

ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 94(ಎ)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಲಬುರಗಿ ಜಿಲ್ಲೆ, **ಕಲಬುರಗಿ ದಕ್ಷಿಣ ವಿಧಾನಸಭಾ ಕ್ಷೇತ್ರದ** ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಗೆ ಈ ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರ | ಸದಸ್ಯರ ಹೆಸರು & ವಿಳಾಸ | ಪ್ರವರ್ಗ |
|---|---|---|---|
| 1 | ಕಲಬುರಗಿ ದಕ್ಷಿಣ | 1) ಶ್ರೀ ದತ್ತಾತ್ರೇಯ ಸಿ.ಪಾಟೀಲ್ ರೇವೂರು (ಅಪ್ಪುಗೌಡ) ಕಲಬುರಗಿ ದಕ್ಷಿಣ ವಿಧಾನ ಸಭಾ ಕ್ಷೇತ್ರ. | ಅಧ್ಯಕ್ಷರು |
| | | 2) ಶ್ರೀ ಮಲ್ಲೇಶಪ್ಪಾ ದುಳಗೊಂಡ, ಮು:ಪಟ್ಟಣ, ಕಲಬುರಗಿ ತಾಲ್ಲೂಕು. | ಸದಸ್ಯರು (ಸಾಮಾನ್ಯ) |
| | | 3) ಶ್ರೀ ನಾಗೇಂದ್ರಪ್ಪ ಗಚ್ಚಿನಮನಿ, ಮು:ನಾಗನಳ್ಳಿ, ಕಲಬುರಗಿ ತಾಲ್ಲೂಕು. | ಸದಸ್ಯರು (ಪ.ಜಾತಿ) |
| | | 4) ಶ್ರೀಮತಿ ನಂದಾರೆಡ್ಡಿ, ಬ್ರಹ್ಮಪೂರ, ಕಲಬುರಗಿ. | ಸದಸ್ಯರು (ಮಹಿಳೆ) |
| | | 5) ತಹಶೀಲ್ದಾರರು, ಕಲಬುರಗಿ ದಕ್ಷಿಣ ತಾಲ್ಲೂಕು. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**PR-507**
**SC-25**

**ಮಹಾಂತೇಗೌಡ ಎಸ್.ಎಲ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ-3)

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಆರ್‌ಡಿ:34:ಎಲ್‌ಜಿಡಿ 2014 ಬೆಂಗಳೂರು, ದಿನಾಂಕ: 21-07-2015**

ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 94(ಎ)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಹಾವೇರಿ ಜಿಲ್ಲೆ, **ಹಾನಗಲ್ ವಿಧಾನಸಭಾ ಕ್ಷೇತ್ರದ** ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಗೆ ಈ ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರ | ಸದಸ್ಯರ ಹೆಸರು & ವಿಳಾಸ | ಪ್ರವರ್ಗ |
|---|---|---|---|
| 1 | ಹಾನಗಲ್ | 1) ಶ್ರೀ ಏಳು ಕೋಟೆಪ್ಪ ಕರಲಿಂಗಪ್ಪ ಹಾವಳೇರ, ಸಾ:ಗೆಜ್ಜೀಹಳ್ಳಿ, ಹಾನಗಲ್ ತಾಲ್ಲೂಕು, ಹಾವೇರಿ ಜಿಲ್ಲೆ. | ಅಧ್ಯಕ್ಷರು |
| | | 2) ಶ್ರೀ ಟಾಕನಗೌಡ ಗಿರಿಯಪ್ಪಗೌಡ ಪಾಟೀಲ, ಸಾ:ಅಕ್ಕಿ ಆಲೂರ, ಹಾನಗಲ್ ತಾಲ್ಲೂಕು. | ಸದಸ್ಯರು (ಸಾಮಾನ್ಯ) |
| | | 3) ಶ್ರೀ ದೇವರಾಜ ಹರಿಜನ ಬಾಳಂಬಿಡ, ಹಾನಗಲ್ ತಾಲ್ಲೂಕು. | ಸದಸ್ಯರು (ಪ.ಜಾತಿ) |
| | | 4) ಶ್ರೀಮತಿ ಆಸಿಯಾ ಅಬ್ದುಲ್ ರಸೀದ್ ಉಪ್ಪಿನ, ಹಿರೇಕಾಂಶಿ, ಹಾನಗಲ್ ತಾಲ್ಲೂಕು. | ಸದಸ್ಯರು (ಮಹಿಳೆ) |
| | | 5) ತಹಶೀಲ್ದಾರರು, ಹಾನಗಲ್ ತಾಲ್ಲೂಕು. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಹಾಂತೇಗೌಡ ಎಸ್.ಎಲ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3)

**PR-508**

**SC-25**

## ಕಂದಾಯ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ:ಆರ್‌ಡಿ:37:ಎಲ್‌ಜಿಟಿ 2014 ಬೆಂಗಳೂರು, ದಿನಾಂಕ: 27–07–2015**

ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 94(ಎ)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತುಮಕೂರು ಜಿಲ್ಲೆ, **ಕುಣಿಗಲ್ ವಿಧಾನಸಭಾ ಕ್ಷೇತ್ರದ** ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಗೆ ಈ ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರ | ಸದಸ್ಯರ ಹೆಸರು & ವಿಳಾಸ | ಪ್ರವರ್ಗ |
|---|---|---|---|
| 1 | ಕುಣಿಗಲ್ | 1) ಶ್ರೀ ಡಿ.ನಾಗರಾಜಯ್ಯ, ಕುಣಿಗಲ್ ವಿಧಾನ ಸಭಾಕ್ಷೇತ್ರ, ತುಮಕೂರು ಜಿಲ್ಲೆ. | ಅಧ್ಯಕ್ಷರು |
| | | 2) ಶ್ರೀ ಶಿವರಾಜು ಬಿನ್ ಚಿಕ್ಕಣ್ಣ(ಮಾಜಿ ತಾಲ್ಲೂಕು ಪಂಚಾಯತ್ ಸದಸ್ಯರು) ಅಂಚೆಪಾಳ್ಯ, ಉಜತ್ತರಿದುರ್ಗ ಹೋಬಳಿ, ಕುಣಿಗಲ್ ತಾಲ್ಲೂಕು. | ಸದಸ್ಯರು (ಸಾಮಾನ್ಯ) |
| | | 3) ಶ್ರೀ ಶೇಷಣ್ಣ ಬಿನ್ ಲೇ.ರಾಮದಾಸ್, ಬೆನವಾರ ಗ್ರಾಮ, ವಳಗೆರೆಪುರ ಅಂಚೆ, ಕುಣಿಗಲ್ ತಾಲ್ಲೂಕು. | ಸದಸ್ಯರು (ಪ.ಜಾತಿ) |
| | | 4) ಶ್ರೀಮತಿ ಸುಜಾತ ಕೋಂ ಶಿವರಾಮಯ್ಯ, ಕತ್ತಿರಿಘಟ್ಟ ಗ್ರಾಮ, ಹಾಲುವಾಗಿಲು ಅಂಚೆ, ಕುಣಿಗಲ್ ತಾಲ್ಲೂಕು. | ಸದಸ್ಯರು (ಮಹಿಳೆ) |
| | | 5) ತಹಶೀಲ್ದಾರರು, ಕುಣಿಗಲ್ ತಾಲ್ಲೂಕು. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಹಾಂತೇಗೌಡ ಎಸ್.ಎಲ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3)

**PR-509**

**SC-25**

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 8 ಎಲ್ಎಂಡಬ್ಲ್ಯೂ 2014, ಬೆಂಗಳೂರು, ದಿನಾಂಕ: 04–08–2015.**

ಕರ್ನಾಟಕ ರಾಜ್ಯಾದ್ಯಂತ **"ಅಗರಬತ್ತಿ"** ಉದ್ದಿಮೆಯ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನ ದರಗಳನ್ನು ಸರ್ಕಾರದ ಅಧಿಸೂಚನೆ ಸಂ:ಕಾಇ 09 ಎಲ್ಎಂಡಬ್ಲ್ಯೂ 2009, ದಿನಾಂಕ: 02–03–2009 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸುವ ಮೂಲಕ ಪರಿಷ್ಕರಿಸಲಾಗಿತ್ತು.

ಕನಿಷ್ಠ ವೇತನ ಪರಿಷ್ಕರಿಸಿ, ನಿಗಧಿಪಡಿಸಲು ಅನುಕೂಲವಾಗುವ ನಿಟ್ಟಿನಲ್ಲಿ ಕನಿಷ್ಠ ವೇತನ ಕಾಯ್ದೆ, 1948ರ ಕಲಂ 5(1)(ಎ)ರಡಿ ಸರ್ಕಾರವು ಅಧಿಸೂಚನೆ ಸಂಖ್ಯೆ: ಕಾಇ 08 ಎಲ್ಎಂಡಬ್ಲ್ಯೂ 2014, ದಿನಾಂಕ: 17–05–2014 ರಂದು ಉಪಸಮಿತಿಯನ್ನು ರಚಿಸಿ ಆದೇಶ ಹೊರಡಿಸಿತ್ತು. ಉಪಸಮಿತಿಯು ಹಲವಾರು ಸಭೆಗಳನ್ನು ನಡೆಸಿರುವುದಲ್ಲದೇ ಉದ್ದಿಮೆಗೆ ಸಂಬಂಧಪಟ್ಟವರಿಂದ ಅಹವಾಲು, ಸಲಹೆ ಮತ್ತು ಅಭಿಪ್ರಾಯಗಳನ್ನು ದಿನಾಂಕ: 15–07–2014 ರೊಳಗೆ ಸಲ್ಲಿಸುವಂತೆ ಕರ್ನಾಟಕ ರಾಜ್ಯಾದ್ಯಂತ ದಿನಪತ್ರಿಕೆಗಳಲ್ಲಿ ಪ್ರಕಟಣೆ ನೀಡಲಾಗಿತ್ತು.

ಉಪಸಮಿತಿಯು ನೀಡಿದ ಶಿಫಾರಸ್ಸನ್ನು ಪರೀಶೀಲಿಸಿ, ಕನಿಷ್ಠ ವೇತನ ಕಾಯ್ದೆ, 1948 (ಕೇಂದ್ರಾಧಿನಿಯಮ ಸಂಖ್ಯೆ: XI) ರ ಸೆಕ್ಸನ್ 3(1)(ಬಿ) ಹಾಗೂ 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ **"ಅಗರಬತ್ತಿ"** ಉದ್ದಿಮೆಯಲ್ಲಿ ತೊಡಗಿರುವ ಕಾರ್ಮಿಕರಿಗೆ ದಿನಾಂಕ:01–04–2015ರಿಂದ ಅನ್ವಯವಾಗುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ. ಸಂ. | ಕೆಲಸದ ಪ್ರವರ್ಗಗಳು | ಕನಿಷ್ಠ ವೇತನ ದರಗಳು |
|---|---|---|
| **1.** | | **ಮಾಸಿಕ ವೇತನ ದರಗಳು** |
| | ಸೂಪರ್‌ವೈಸರ್ | ₹. 8,900–00 |
| | ಲ್ಯಾಬ್ ಟೆಕ್ನಿಷೀಯನ್ | ₹. 8,600–00 |
| | ಲ್ಯಾಬ್ ಅಸಿಸ್ಟೆಂಟ್ | ₹. 8,400–00 |
| **2.** | **ಅಗರಬತ್ತಿ ತಿರುಪುವವರು** | |
| | **ಕೆಲಸದ ಸ್ವರೂಪ** | **1000 ಬತ್ತಿಗಳಿಗೆ ನಿಗಧಿಪಡಿಸಿರುವ ಕನಿಷ್ಠ ವೇತನ ದರಗಳು** |
| 1 | 9" ಕ್ಕಿಂತ ಕಡಿಮೆ ಗಾತ್ರದ ತಿರುಪಿದ ಬತ್ತಿಗಳು (ತೆಳು, ಸಾಧಾರಣ, ದಪ್ಪ) | ₹. 43–00 |
| 2 | 9" ಕ್ಕಿಂತಲೂ ಹೆಚ್ಚಿನ ಗಾತ್ರದ ತಿರುಪಿದ ಬತ್ತಿಗಳು (ತೆಳು, ಸಾಧಾರಣ, ದಪ್ಪ) | ₹. 46–50 |
| 3 | 9" ವರೆಗಿನ ಪ್ಲೋರಾ (ದರ್ಬಾರ್) ತಿರುಪಿದ ಬತ್ತಿಗಳು (ತೆಳು, ಸಾಧಾರಣ, ದಪ್ಪ) | ₹. 43–00 |
| 4 | 9" ಕ್ಕಿಂತಲೂ ಹೆಚ್ಚಿನ ಗಾತ್ರದ ಪ್ಲೋರಾ (ದರ್ಬಾರ್) ತಿರುಪಿದ ಬತ್ತಿಗಳು (ತೆಳು, ಸಾಧಾರಣ, ದಪ್ಪ) | ₹. 49–00 |
| **3.** | **ಅಗರಬತ್ತಿ ಪ್ಯಾಕ್ ಮಾಡುವವರು** | |
| **ಅ** | **ಪ್ಯಾಕೆಟ್ಸ್** | **12 ಪೊಟ್ಟಣಗಳ ಗುಚ್ಚಕ್ಕೆ ನಿಗಧಿಪಡಿಸಿರುವ ಕನಿಷ್ಠ ವೇತನ ದರಗಳು** |
| 1 | 15 ಗ್ರಾಂ ಗಿಂತಲೂ ಕಡಿಮೆ ತೂಕದ ಪ್ಯಾಕ್‌ಗಳು | ₹. 1–50 |
| 2 | 15 ಗ್ರಾಂನಿಂದ 50 ಗ್ರಾಂವರೆಗಿನ ಪ್ಯಾಕ್‌ಗಳು | ₹. 1–55 |
| 3 | 51 ಗ್ರಾಂನಿಂದ 160 ಗ್ರಾಂವರೆಗಿನ ಪ್ಯಾಕ್‌ಗಳು | ₹. 1–90 |
| 4 | 160 ಗ್ರಾಂ ಕ್ಕಿಂತಲೂ ಮೇಲ್ಪಟ್ಟ ಪ್ಯಾಕ್‌ಗಳು | ₹. 2.40 |
| 5 | 2 ಇನ್ 1 ಪ್ಯಾಕ್‌ಗಳು | ₹. 1–60 |
| 6 | 3 ಇನ್ 1 ಪ್ಯಾಕ್‌ಗಳು | ₹. 1–90 |
| 7 | 4 ಇನ್ 1 ಪ್ಯಾಕ್‌ಗಳು | ₹. 2–35 |
| 8 | 5 ಇನ್ 1 ಪ್ಯಾಕ್‌ಗಳು | ₹. 2–80 |
| 9 | 7 ಇನ್ 1 ಪ್ಯಾಕ್‌ಗಳು | ₹. 3–40 |
| **ಆ** | **ಪೌಚ್‌ಗಳು** | **12 ಪೊಟ್ಟಣಗಳ ಗುಚ್ಚಕ್ಕೆ ನಿಗಧಿಪಡಿಸಿರುವ ಕನಿಷ್ಠ ವೇತನ ದರಗಳು** |
| 1 | 15 ಗ್ರಾಂನಿಂದ 50 ಗ್ರಾಂವರೆಗಿನ ಪ್ಯಾಕ್‌ಗಳು | ₹. 1–50 |
| 2 | 51 ಗ್ರಾಂನಿಂದ 170 ಗ್ರಾಂವರೆಗಿನ ಪ್ಯಾಕ್‌ಗಳು | ₹. 1–55 |

| ಕ್ರ. ಸಂ. | ಕೆಲಸದ ಪ್ರವರ್ಗಗಳು | ಕನಿಷ್ಠ ವೇತನ ದರಗಳು |
|---|---|---|
| 3 | 170 ಗ್ರಾಂ ಕ್ಕಿಂತಲೂ ಮೇಲ್ಪಟ್ಟ ಪ್ಯಾಕ್‌ಗಳು | ₹. 1–60 |
| ಇ | **ಹೆಕ್ಸಾ ಪ್ಯಾಕೆಟ್ಸ್** | **12 ಪೊಟ್ಟಣಗಳ ಗುಚ್ಚಕ್ಕೆ ನಿಗಧಿಪಡಿಸಿರುವ ಕನಿಷ್ಠ ವೇತನ ದರಗಳು** |
| 1 | 15 ಗ್ರಾಂ ಕ್ಕಿಂತಲೂ ಹೆಚ್ಚಿನ ತೂಕದ ಪ್ಯಾಕ್‌ಗಳು | ₹. 2–00 |
| **4.** | **ಬಂಡಲ್ ಪ್ಯಾಕಿಂಗ್** | **ಪ್ರತಿ ಕೆ.ಜಿ.ಗೆ ನಿಗಧಿಪಡಿಸಿರುವ ಕನಿಷ್ಠ ವೇತನ ದರಗಳು** |
| 1 | 100 ಗ್ರಾಂ ವರೆಗಿನ ಬಂಡಲ್‌ಗಳು | ₹. 3–50 |
| 2 | 100 ಗ್ರಾಂ ರಿಂದ 250 ಗ್ರಾಂವರೆಗಿನ ಬಂಡಲ್‌ಗಳು | ₹. 3–25 |
| 3 | 250 ಗ್ರಾಂ ಕ್ಕಿಂತಲೂ ಹೆಚ್ಚಿನ ತೂಕದ ಬಂಡಲ್‌ಗಳು | ₹. 3–00 |
| **5.** | ಗ್ರೈಂಡರ್ಸ್<br>ಮಿಕ್ಸರ್ಸ್<br>ಕೋಟರ್ಸ್/ ಡಿಪ್ಪರ್ಸ್<br>ಬತ್ತಿ ಮೆಷಿನ್ ಅಪರೇಟರ್ಸ್<br>ಕಾರ್ಟನ್ ಪ್ಯಾಕರ್ಸ್ | **ಪ್ರತಿ ದಿನಕ್ಕೆ ನಿಗಧಿಪಡಿಸಿರುವ ಕನಿಷ್ಠ ವೇತನ ದರಗಳು**<br>₹. 310–00 |
| **6.** | **ಕಛೇರಿ ಸಿಬ್ಬಂದಿ** | **ನಿಗಧಿಪಡಿಸಿರುವ ಮಾಸಿಕ ವೇತನ ದರಗಳು** |
| 1 | ಮ್ಯಾನೇಜರ್/ ಪರ್ಸನಲ್ ಆಫೀಸರ್ | ₹. 9,150–00 |
| 2 | ಅಸಿಸ್ಟೆಂಟ್ ಮ್ಯಾನೇಜರ್/ಅಸಿಸ್ಟೆಂಟ್ ಪರ್ಸನಲ್ ಆಫೀಸರ್ | ₹. 8,900–00 |
| 3 | ಅಕೌಟೆಂಟ್/ ಕ್ಯಾಷಿಯರ್ /ಕ್ಲರ್ಕ್ / ಸ್ಟೋರ್ ಕೀಪರ್ | ₹. 8,500–00 |
| 4 | ಶೀಘ್ರಲಿಪಿಗಾರ/ಕಂಪ್ಯೂಟರ್ ಆಪರೇಟರ್/ ಸ್ವಾಗತಕಾರರು | ₹. 8,350–00 |
| 5 | ಬೆರಳಚ್ಚುಗಾರರು | ₹. 8,000–00 |
| 6 | ಆಫೀಸ್‌ಬಾಯ್/ಪ್ಯೂನ್/ವಾಚಮನ್/ ಅಟೆಂಡರ್/ ಗಾರ್ಡನರ್ /ಸ್ವೀಪರ್ / ಹೌಸ್‌ಕೀಪಿಂಗ್ | ₹. 7,350–00 |
| **7.** | **ಚಾಲಕರು** | **ನಿಗಧಿಪಡಿಸಿರುವ ಮಾಸಿಕ ವೇತನ ದರಗಳು** |
| 1 | ಲಾರಿ ಚಾಲಕರು | ₹. 8,300–00 |
| 2 | ಕಾರು / ಜೀಪ್ / ತ್ರಿಚಕ್ರ ವಾಹನ (ಎಲ್‌ಸಿವಿ) ಚಾಲಕರು | ₹. 7,900–00 |
| 3 | ಲಾರಿ / ಜೀಪ್ / ಕಾರ್ ಕ್ಲೀನರ್ಸ್ | ₹. 7,400–00 |
| | | **ಪ್ರತಿ ದಿನಕ್ಕೆ ನಿಗಧಿಪಡಿಸಿರುವ ಕನಿಷ್ಠ ವೇತನ ದರಗಳು** |
| **8.** | ಲೋಡರ್ಸ್ ಮತ್ತು ಅನ್‌ಲೋಡರ್ಸ್ | ₹. 310–00 |
| **9.** | ಜನರಲ್ ವರ್ಕರ್ಸ್ (ಮೇಲೆ ತಿಳಿಸಿರುವ ಯಾವುದೇ ವರ್ಗಕ್ಕೆ ಸೇರದಿರುವವರು) | ₹. 295–00 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 5780 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 5780 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2014 ರಿಂದ ಡಿಸೆಂಬರ್ 2014)ರ ಸರಾಸರಿ ಆಧಾರದ ಮೇಲೆ 2015 ಏಪ್ರಿಲ್, 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–

**ಅ) ಮಾಸಿಕ ವೇತನವನ್ನು ಪಡೆಯುವವರು:–** ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು

X ತುಟ್ಟಿಭತ್ಯೆಯ ದರ X 30 ದಿನಗಳು= ತಿಂಗಳ ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು} \times \text{ತುಟ್ಟಿಭತ್ಯೆಯ ದರ} \times 30}{26} = \text{ದಿನದ ತುಟ್ಟಿಭತ್ಯೆ}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಪ್ರತಿ ವರ್ಷ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.
11. ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

**ಈ. ವಿಜಯಲಕ್ಷ್ಮಿ**
ಪೀಠಾಧಿಕಾರಿ–2 (ಪ್ರ),
ಕಾರ್ಮಿಕ ಇಲಾಖೆ.

**P.R. 514**
**SC - 200**

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕಾಇ 21 ಎಲ್‌ಎಂಡಬ್ಲ್ಯೂ 2014, ಬೆಂಗಳೂರು, ದಿನಾಂಕ: 03–08–2015.**

ಕರ್ನಾಟಕ ರಾಜ್ಯಾದ್ಯಂತ **"ಆಯಿಲ್ ಮಿಲ್ಸ್"** ಉದ್ದಿಮೆಗಳಲ್ಲಿ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯಪತ್ರದ ಭಾಗ–4ಎ ರಲ್ಲಿ ದಿನಾಂಕ:30–10–2014 ರಂದು ಪ್ರಕಟಿಸಿ 1948ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರ ಕಾಯ್ದೆ ಸಂಖ್ಯೆ: XI) ಕಲಂ 5ರ ಉಪಕಲಂ 1ರ (ಬಿ) ಖಂಡದ ಮೇರೆಗೆ ಬಾಧಿತರಾಗುವ / ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲು ಎರಡು ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಅವರಿಂದ ಯಾವುದೇ ಸಲಹೆ / ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ನಂತರ, ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸದರಿ ಮಂಡಳಿಯಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಗಣನೆಗೆ ತೆಗೆದುಕೊಂಡು, 1948ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರ ನಿಯಮ ಸಂಖ್ಯೆ: XI) ಕಲಂ 3ರ ಉಪಕಲಂ (1)ರ (ಬಿ) ಖಂಡ ಹಾಗೂ ಕಲಂ 5ರ ಉಪಕಲಂ (1)ನೇ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ ಕರ್ನಾಟಕ ರಾಜ್ಯಾದ್ಯಂತ **"ಆಯಿಲ್ ಮಿಲ್ಸ್"** ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ದಿನಾಂಕ:01–04–2015ರಿಂದ ಅನ್ವಯವಾಗುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು | | | | | |
|---|---|---|---|---|---|---|---|
| | | ವಲಯ–1 | | ವಲಯ–2 | | ವಲಯ–3 | |
| | | ದಿನಕ್ಕೆ | ತಿಂಗಳಿಗೆ | ದಿನಕ್ಕೆ | ತಿಂಗಳಿಗೆ | ದಿನಕ್ಕೆ | ತಿಂಗಳಿಗೆ |
| I | ಕುಶಲ ಕಾರ್ಮಿಕರು (ಎ) | | | | | | |
| | 1. ಸೂಪರ್‌ವೈಸರ್ [ಮೇಲ್ವಿಚಾರಕರು] | 420–00 | 10920–00 | 410–00 | 10660–00 | 383–00 | 9958–00 |
| | 2. ಟೆಕ್ನಿಕಲ್ ಸೂಪರ್‌ವೈಸರ್ | | | | | | |
| II | ಕುಶಲ ಕಾರ್ಮಿಕರು (ಬಿ) | | | | | | |
| 1. | ಎಂಜಿನ್ ಡ್ರೈವರ್ | 406–00 | 10556–00 | 396–00 | 10296–00 | 370–00 | 9620–00 |
| 2. | ಪ್ಲಂಬರ್ [ಮೆಕ್ಯಾನಿಕ್] | | | | | | |
| 3. | ಬಾಯ್ಲರ್ ಅಟೆಂಡರ್ | | | | | | |
| 4. | ಸೋಲರರ್ | | | | | | |
| 5. | ಟಿನ್ ಮೇಕರ್ | | | | | | |
| 6. | ಆಪರೇಟರ್ | | | | | | |
| 7. | ಎಕ್ಸ್‌ಪಲ್ಲರ್ ಡ್ರೈವರ್ | | | | | | |
| 8. | ಕಾರ್ಪೆಂಟರ್ | | | | | | |
| III | ಅರೆ ಕುಶಲ ಕಾರ್ಮಿಕರು | | | | | | |
| 1. | ಆಯಿಲರ್ಸ್ | 401–00 | 10426–00 | 391–00 | 10296–00 | 370–00 | 9620–00 |
| 2. | ಅಪ್ರೆಂಟೀಸ್ ಫಾರ್ ಸ್ಕಿಲ್ಡ್ ಕ್ಯಾಟಗರೀಸ್ | | | | | | |
| IV | ಕುಶಲರಲ್ಲದ ಕಾರ್ಮಿಕರು | | | | | | |
| 1. | ಎಂಜಿನ್ ಡ್ರೈವರ್ | 385–00 | 10010–00 | 375–00 | 9750–00 | 350–00 | 9100–00 |
| 2. | ಪ್ಲಂಬರ್ [ಮೆಕ್ಯಾನಿಕ್] | | | | | | |
| 3. | ಬಾಯ್ಲರ್ ಅಟೆಂಡರ್ | | | | | | |
| 4. | ಸೋಲರರ್ | | | | | | |
| 5. | ಟಿನ್ ಮೇಕರ್ | | | | | | |
| 6. | ಆಪರೇಟರ್ | | | | | | |
| 7. | ಎಕ್ಸ್‌ಪಲ್ಲರ್ ಡ್ರೈವರ್ | | | | | | |
| 8. | ಕಾರ್ಪೆಂಟರ್ | | | | | | |
| V | ಡ್ರೈವರ್ಸ್ | | | | | | |
| 1. | ಲಾರಿ ಡ್ರೈವರ್ | 449–00 | 11674–00 | 435–00 | 11310–00 | 406–00 | 10556–00 |
| 2. | ಕಾರ್/ಜೀಪ್ ಡ್ರೈವರ್ | 421–00 | 10946–00 | 410–00 | 10660–00 | 383–00 | 9958–00 |
| 3. | ಲಾರಿ/ಕಾರ್/ಜೀಪ್ ಕ್ಲೀನರ್ | 385–00 | 10010–00 | 375–00 | 9750–00 | 350–00 | 9100–00 |
| VI | ಕಛೇರಿ ಸಿಬ್ಬಂದಿ | | | | | | |
| 1. | ಮ್ಯಾನೇಜರ್/ ಪರ್ಸನಲ್ ಆಫೀಸರ್ | 511–00 | 13286–00 | 497–00 | 12922–00 | 464–00 | 12064–00 |
| 2. | ಅಸಿಸ್ಟೆಂಟ್ ಮ್ಯಾನೇಜರ್/ಅಸಿಸ್ಟೆಂಟ್ ಪರ್ಸನಲ್ ಮ್ಯಾನೇಜರ್ | 494–00 | 12844–00 | 481–00 | 12506–00 | 449–00 | 11674–00 |
| 3. | ಅಕೌಟೆಂಟ್ | 476–00 | 12376–00 | 464–00 | 12064–00 | 433–00 | 11258–00 |
| 4. | ಕ್ಯಾಷಿಯರ್/ಸೀನಿಯರ್ ಕ್ಲರ್ಕ | 467–00 | 12142–00 | 455–00 | 11830–00 | 425–00 | 11050–00 |
| 5. | ಶೀಘ್ರಲಿಪಿಗಾರ/ಕಂಪ್ಯೂಟರ್ ಆಪರೇಟರ್ | | | | | | |
| 6. | ಸ್ಟೋರ್ ಕೀಪರ್/ ಟೆಲಿಫೋನ್ ಸಹಾಯಕ | | | | | | |
| 7. | ಬೆರಳಚ್ಚುಗಾರ/ಡಾಟಾ ಎಂಟ್ರೀ ಆಪರೇಟರ್ | 458–00 | 11908–00 | 46–00 | 11596–00 | 416–00 | 10816–00 |
| 8. | ಗುಮಾಸ್ತ/ ಜೂನಿಯರ್ ಕ್ಲರ್ಕ | | | | | | |
| 9. | ಆಫೀಸ್‌ಬಾಯ್/ಪ್ಯೂನ್/ ವಾಚಮನ್/ ಸ್ವೀಪರ್ ಅಟೆಂಡರ್. | 385–00 | 10010–00 | 375–00 | 9750–00 | 350–00 | 9100–00 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 6205 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 6205 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ಪಾವತಿಸತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2015 ರಿಂದ ಡಿಸೆಂಬರ್ 2015) ಸರಾಸರಿ ಆಧಾರದ ಮೇಲೆ 2016 ಏಪ್ರಿಲ್, 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–

**ಅ) ಮಾಸಿಕ ವೇತನವನ್ನು ಪಡೆಯುವವರು:–** ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ

ಅಂಶಗಳು X ತುಟ್ಟಿಭತ್ಯೆಯ ದರ X 30 ದಿನಗಳು= ತಿಂಗಳ ತುಟ್ಟಿಭತ್ಯೆ

**ಆ) ದಿನಗೂಲಿ ವೇತನ ಪಡೆಯುವವರು :–**

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು X ತುಟ್ಟಿಭತ್ಯೆಯ ದರ X 30}}{26} = \text{ದಿನದ ತುಟ್ಟಿಭತ್ಯೆ}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ವೇತನ ದರಗಳನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.
7. ಸಂಸ್ಥೆಯಲ್ಲಿ ನಿಗಧಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಅವರ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.
10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.
11. ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.
12. **ಅತಿ ಕುಶಲ:** ಅತಿ ಕುಶಲ ಕೆಲಸಗಾರರು ಎಂದರೆ ಯಾರು ಹೆಚ್ಚಿನ ನೈಪುಣ್ಯತೆ ಕೆಲಸವನ್ನು ಅತಿ ಹೆಚ್ಚು ನಿಖರವಾಗಿ ಮಾಡಬಲ್ಲವರಾಗಿದ್ದು, ನಕ್ಷೆಯನ್ನು ಓದಬಲ್ಲ ಮತ್ತು ಅದರ ಆಧಾರದ ಮೇಲೆ ಕೆಲಸ ಮಾಡಬಲ್ಲವರಾಗಿದ್ದು, ಅವರ ವಿಭಾಗದ 'ಕುಶಲ' ಮತ್ತು ಇತರೇ ಕೆಲಸಗಾರರ ಕೆಲಸವನ್ನು ನಿರ್ದೇಶಿಸಬಲ್ಲ ಸಾಮರ್ಥ್ಯವುಳ್ಳವರಾಗಿದ್ದು, ಆ ವಿಭಾಗದ ಕೆಲಸವನ್ನು ಸ್ವತಂತ್ರವಾಗಿ ನಿರ್ವಹಿಸಿ ಕೊಂಡು ಹೋಗಬಲ್ಲವರಾಗಿರಬೇಕು.
13. **ಕುಶಲ:** ಕುಶಲ ಕೆಲಸಗಾರರು ಅಂದರೆ ಸ್ವತಂತ್ರವಾಗಿ ಹಾಗೂ ಪರಿಣಾಮಕಾರಿಯಾಗಿ ಮತ್ತು ಕೆಲಸವನ್ನು ಸರಿಯಾಗಿ ಮಾಡಬಲ್ಲ ಸಾಮರ್ಥ್ಯವುಳ್ಳ ಕಾರ್ಮಿಕ. ಅವಶ್ಯ ಬಿದ್ದರೆ ಸರಳವಾದ ನಕ್ಷೆಗಳನ್ನು ಓದಿ, ಕೆಲಸ ಮಾಡುವ ಸಾಮರ್ಥ್ಯವುಳ್ಳವನಾಗಿರಬೇಕು.

14. **ಅರೆ ಕುಶಲ :** ತನ್ನ ಕಸುಬಿನ ಬಗ್ಗೆ ಸಾಕಷ್ಟು ಜ್ಞಾನವಿರುವ ಹಾಗೂ ಪುನರಾವರ್ತನೆ ಕೆಲಸ ಮಾಡುವ ಸಾಮರ್ಥ್ಯವುಳ್ಳ ಹಾಗೂ ಯಂತ್ರೋಪಕರಣಗಳ ಸಹಾಯದಿಂದ ಸರಳವಾದ ಕೆಲಸಗಳನ್ನು ಮಾಡಬಲ್ಲವರು.

15. **ಕುಶಲರಲ್ಲದವರು :** ಸ್ವತಂತ್ರವಾದ ನಿರ್ಣಯದ ಅವಶ್ಯಕತೆಯಿಲ್ಲದ ಅಥವಾ ಹಿಂದಿನ ಅನುಭವ ಇಲ್ಲದೆ ಆದರೆ ಉದ್ಯೋಗದ ವಾತಾವರಣದ ಪರಿಚಯವಿರುವ ಕೆಲಸ ಮಾಡುವುದು, ದೈಹಿಕ ಪರಿಶ್ರಮವಿಲ್ಲದೆ ವಿವಿಧ ರೀತಿಯ ವಸ್ತುಗಳು ಮತ್ತು ಸಾಮಾನ್ಯ ಜ್ಞಾನವಿರುವ ಕೆಲಸವನ್ನು ಮಾಡುವವರು.

ಯಾವುದೇ ಯಂತ್ರಗಳನ್ನು ನಡೆಸಲು ನೇಮಿಸಿದ್ದ ಕಾರ್ಮಿಕರನ್ನು ಕುಶಲರಲ್ಲದ ವರ್ಗಕ್ಕೆ ಸೇರಿಸಬಾರದು. ಕಾವಲುಗಾರ, ಸಿಪಾಯಿ, ಚೌಕೀದಾರ, ಕಸ ಗುಡಿಸುವವರು, ಜಾಡಮಾಲಿ ಹಾಗೂ ಅದೇ ತರಹದ ಕೆಲಸ ಮಾಡುವ ಕಾರ್ಮಿಕರನ್ನು ಕುಶಲರಲ್ಲದ ವರ್ಗಕ್ಕೆ ಸೇರಿಸಬಹುದು.

ವಲಯ–1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳು ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು

ವಲಯ–2: ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳು.

ವಲಯ–3: ವಲಯ–1 ಮತ್ತು ವಲಯ–2ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

**P.R. 515**
**SC. 200**

**ಈ. ವಿಜಯಲಕ್ಷ್ಮಿ**
ಪೀಠಾಧಿಕಾರಿ–2 (ಪ್ರ),
ಕಾರ್ಮಿಕ ಇಲಾಖೆ.

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕಾಇ 123 ಎಲ್‌ಡಬ್ಲ್ಯೂಎ 2015, ಬೆಂಗಳೂರು, ದಿನಾಂಕ: 11–08–2015.**

ಕರ್ನಾಟಕ ರಾಜ್ಯಾದ್ಯಂತ **"ಭದ್ರತಾ ಏಜೆನ್ಸಿ"** ಉದ್ದಿಮೆಗಳಲ್ಲಿ ಕೆಲಸದಲ್ಲಿ ತೊಡಗಿರುವ ವಿವಿಧ ವರ್ಗದ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. 1948ರ ಕನಿಷ್ಠ ವೇತನಕಾಯ್ದೆಯ (ಕೇಂದ್ರ ನಿಯಮ ಸಂಖ್ಯೆ: XI) ಕಲಂ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯಅಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಎರಡು (2) ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ/ ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು–560001 ಅಥವಾ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–560029 ಇವರಿಗೆ ಸಲ್ಲಿಸಬಹುದಾಗಿರುತ್ತದೆ.

1948ರ ಕನಿಷ್ಠ ವೇತನಕಾಯ್ದೆಯ ಕಲಂ 3(1)(ಬಿ) ಮತ್ತು 5(1)(ಬಿ)ರಡಿಯಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರವು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ **"ಭದ್ರತಾ ಏಜೆನ್ಸಿ"** ಉದ್ದಿಮೆಗೆ ಈ ಕೆಳಕಂಡಂತೆ ಕನಿಷ್ಠ ವೇತನ ದರಗಳು ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

**ಭಾಗ–1 : ಕ್ಷೇತ್ರ ಸಿಬ್ಬಂದಿ (Field Staff)**

| ಕ್ರ ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು | | | |
|---|---|---|---|---|---|
| | | ವಲಯ–1 | | ವಲಯ–2 | |
| | | ದಿನಕ್ಕೆ | ತಿಂಗಳಿಗೆ | ದಿನಕ್ಕೆ | ತಿಂಗಳಿಗೆ |
| 1 | ಸೆಕ್ಯೂರಿಟಿ ಸೂಪರ್‌ವೈಸರ್ | 475–00 | 12360–00 | 465–00 | 12100–00 |
| 2 | ಸೆಕ್ಯೂರಿಟಿ ಆಫೀಸರ್ | | | | |
| 3 | ಫೀಲ್ಡ್ ಆಫೀಸರ್ | | | | |
| 4 | ಸೆಕ್ಯೂರಿಟಿ ಇನ್ಸ್‌ಪೆಕ್ಟರ್ | 437–00 | 11372–00 | 423–00 | 11008–00 |
| 5 | ಸಹಾಯಕ ಸೆಕ್ಯೂರಿಟಿ ಆಫೀಸರ್ | | | | |
| 6 | ಹೆಡ್‌ಗಾರ್ಡ್ | 426–00 | 11086–00 | 413–00 | 10748–00 |
| 7 | ಇಂಟಲಿಜೆನ್ಸ್ ಮತ್ತು ಫೈರ್‌ಫೈಟಿಂಗ್ | 415–00 | 10800–00 | 402–00 | 10462–00 |
| 8 | ಸೆಕ್ಯೂರಿಟಿಗಾರ್ಡ್ | | | | |
| 9 | ಲೇಡಿಗಾರ್ಡ್ / ಲೇಡಿಸರ್ಚರ್ | | | | |

| ಕ್ರ ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು | | | |
|---|---|---|---|---|---|
| | | ವಲಯ–1 | | ವಲಯ–2 | |
| | | ದಿನಕ್ಕೆ | ತಿಂಗಳಿಗೆ | ದಿನಕ್ಕೆ | ತಿಂಗಳಿಗೆ |
| ಚಾಲಕರು/ಕ್ಲೀನರ್ (Drivers/Cleaners) | | | | | |
| 1. | ವಾಹನ ಚಾಲಕರು | 410–00 | 10670–00 | 397–00 | 10332–00 |
| 2. | ವಾಹನ ಕ್ಲೀನರ್ | 375–00 | 9760–00 | 365–00 | 9500–00 |
| ಭಾಗ–2 : ಕಛೇರಿ ಸಿಬ್ಬಂದಿ (Office Staff) | | | | | |
| 1. | ಮ್ಯಾನೇಜರ್/ ಪರ್ಸನಲ್ ಆಫೀಸರ್ | 508–00 | 13218–00 | 492–00 | 12802–00 |
| 2. | ಅಸಿಸ್ಟೆಂಟ್ ಮ್ಯಾನೇಜರ್/ಅಸಿಸ್ಟೆಂಟ್ ಪರ್ಸನಲ್ ಮ್ಯಾನೇಜರ್ | 490–00 | 12750–00 | 475–00 | 12360–00 |
| 3. | ಅಕೌಂಟೆಂಟ್ | 470–00 | 12230–00 | 455–00 | 11840–00 |
| 4. | ಕ್ಯಾಷಿಯರ್/ಸೀನಿಯರ್ ಕ್ಲರ್ಕ | 460–00 | 11970–00 | 437–00 | 11372–00 |
| 5. | ಶೀಘ್ರಲಿಪಿಗಾರ/ಕಂಪ್ಯೂಟರ್ ಆಪರೇಟರ್ | | | | |
| 6. | ಸ್ಟೋರ್‌ಕೀಪರ್/ಟೆಲಿಫೋನ್ ಆಪರೇಟರ್ | | | | |
| 7. | ಬೆರಳಚ್ಚುಗಾರ/ಡಾಟಾಎಂಟ್ರಿ ಆಪರೇಟರ್ | 450–00 | 11710–00 | 427–00 | 11112–00 |
| 8. | ಗುಮಾಸ್ತ | | | | |
| 9. | ಆಫೀಸ್‌ಬಾಯ್/ಪ್ಯೂನ್/ ವಾಚಮನ್/ ಸ್ವೀಪರ್ ಅಟೆಂಡರ್. | 375–00 | 9760–00 | 365–00 | 9500–00 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 5780 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 5780 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2014 ರಿಂದ ಡಿಸೆಂಬರ್ 2015)ರ ಸರಾಸರಿ ಆಧಾರದ ಮೇಲೆ 2015ರ ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

***ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ***

**ಅ) ಮಾಸಿಕ ವೇತನವನ್ನು ಪಡೆಯುವವರು:–**

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು X ತುಟ್ಟಿಭತ್ಯೆಯ ದರ X 30 ದಿನಗಳು= ಮಾಸಿಕ ತುಟ್ಟಿಭತ್ಯೆ

**ಆ) ದಿನಗೂಲಿ ವೇತನವನ್ನು ಪಡೆಯುವವರು:–**

ಪ್ರತಿ ವರ್ಷ ಹೆಚ್ಚಾಗುವ ಸಿಪಿಐ ಅಂಶಗಳು X ತುಟ್ಟಿಭತ್ಯೆಯ ದರ X 30 / 26 = ದಿನದ ತುಟ್ಟಿಭತ್ಯೆ

2. ಮಹಿಳೆಯರು ಮತ್ತು ಪುರುಷರು ಒಂದೆ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ನೌಕರರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು

ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು, ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.

7. ಸಂಸ್ಥೆಯಲ್ಲಿ ನಿಗಧಿಪಡಿಸಿರುವ ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು ಅಥವಾ ಅಂತಹ ದಿನದ ವೇತನದೊಂದಿಗೆ ಪರ್ಯಾಯವಾಗಿ ಮತ್ತೊಂದು ದಿನ ವೇತನ ಸಹಿತ ರಜೆ ನೀಡುವುದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

11. ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲ ಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

12. ಭದ್ರತಾ ಅಧಿಕಾರಿಗಳು ಮತ್ತು ಭದ್ರತಾ ಕಾರ್ಮಿಕರಿಗೆ ವರ್ಷಕ್ಕೊಮ್ಮೆ ಒಂದು ಜೊತೆ ಬೂಟ್ಸ್ ಮತ್ತು 2 ಜೊತೆ ಕಾಲು ಚೀಲ ಕೊಡತಕ್ಕದ್ದು ಅಥವಾ ಖರೀದಿಸಲು ವಾರ್ಷಿಕ ₹. 850–00 ಗಳನ್ನು ನಗದಾಗಿ ಪಾವತಿಸತಕ್ಕದ್ದು.

13. 2 ವರ್ಷಕ್ಕೊಮ್ಮೆ ರಾತ್ರಿ ಕಾವಲುಗಾರರಿಗೆ ಒಂದು ಮಫ್ಲರ್, ಒಂದು ಸ್ವೆಟರ್ ಉಚಿತವಾಗಿ ಕೊಡತಕ್ಕದ್ದು ಅಥವಾ ಖರೀದಿಸಲು ಎರಡು ವರ್ಷಕ್ಕೊಮ್ಮೆ ₹. 300–00 ಗಳನ್ನು ನಗದಾಗಿ ಪಾವತಿಸತಕ್ಕದ್ದು.

14. 2 ವರ್ಷಕ್ಕೊಮ್ಮೆ 2 ಜೊತೆ ಸಮವಸ್ತ್ರ, ಟೋಪಿ [ಕ್ಯಾಪ್ ಅಥವಾ ಹ್ಯಾಟ್] ಮತ್ತು ಬೆಲ್ಟ್ ಕೊಡತಕ್ಕದ್ದು ಅಥವಾ ಖರೀದಿಸಲು ಎರಡು ವರ್ಷಕ್ಕೊಮ್ಮೆ ₹. 1500–00 ಗಳನ್ನು ನಗದಾಗಿ ಪಾವತಿಸತಕ್ಕದ್ದು.

15. ವಾಷಿಂಗ್ ಅಲೋಯನ್ಸ್ ಮಾಸಿಕ ₹. 300–00 ಗಳಂತೆ ಪಾವತಿಸತಕ್ಕದ್ದು.

16. ರಾತ್ರಿ ಕಾವಲುಗಾರರಿಗೆ ಬ್ಯಾಟರಿ ಮತ್ತು ಟಾರ್ಚ್ ಒದಗಿಸತಕ್ಕದ್ದು.

17. ಈಗಾಗಲೇ ಇತರೇ ಸೌಲಭ್ಯಗಳನ್ನು ನೀಡುತ್ತಿದ್ದಲ್ಲಿ ಅದನ್ನು ಮುಂದುವರೆಸತಕ್ಕದ್ದು.

ವಲಯ–1: ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು ಹಾಗೂ ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು.

ವಲಯ–2: ವಲಯ–1 ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಎಲ್ಲಾ ಪ್ರದೇಶಗಳು.

**ಈ. ವಿಜಯಲಕ್ಷ್ಮಿ**
ಪೀಠಾಧಿಕಾರಿ–2 (ಪ್ರ)
ಕಾರ್ಮಿಕ ಇಲಾಖೆ.

**P.R. 516**
**SC. 200**

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 23 ಎಲ್‌ಎಂಡಬ್ಲ್ಯೂ 2014, ಬೆಂಗಳೂರು, ದಿನಾಂಕ: 03–08–2015.**

ಕರ್ನಾಟಕ ರಾಜ್ಯಾದ್ಯಂತ **"ಪ್ರಿಂಟಿಂಗ್ ಪ್ರೆಸ್"** ಉದ್ದಿಮೆಗಳಲ್ಲಿ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯಪತ್ರದ ಭಾಗ–4ಎ ರಲ್ಲಿ ದಿನಾಂಕ:30–10–2014 ರಂದು ಪ್ರಕಟಿಸಿ 1948ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರ ಕಾಯ್ದೆ ಸಂಖ್ಯೆ: XI) ಕಲಂ 5ರ ಉಪಕಲಂ 1ರ (ಬಿ) ಖಂಡದ ಮೇರೆಗೆ ಬಾಧಿತರಾಗುವ / ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲು ಎರಡು ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಅವರಿಂದ ಯಾವುದೇ ಸಲಹೆ / ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ನಂತರ, ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸದರಿ ಮಂಡಳಿಯಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಗಣನೆಗೆ ತೆಗೆದುಕೊಂಡು, 1948ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರ ನಿಯಮ ಸಂಖ್ಯೆ: XI) ಕಲಂ 3ರ ಉಪಕಲಂ (1)ರ (ಬಿ) ಖಂಡ ಹಾಗೂ ಕಲಂ 5ರ ಉಪಕಲಂ (1)ನೇ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ ಕರ್ನಾಟಕ ರಾಜ್ಯಾದ್ಯಂತ **"ಪ್ರಿಂಟಿಂಗ್ ಪ್ರೆಸ್"** ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ದಿನಾಂಕ: 01–04–2015ರಿಂದ ಅನ್ವಯವಾಗುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

ಅನುಸೂಚಿ

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು | | | | | |
|---|---|---|---|---|---|---|---|
| | | ವಲಯ–1 | | ವಲಯ–2 | | ವಲಯ–3 | |
| | | ದಿನಕ್ಕೆ | ತಿಂಗಳಿಗೆ | ದಿನಕ್ಕೆ | ತಿಂಗಳಿಗೆ | ದಿನಕ್ಕೆ | ತಿಂಗಳಿಗೆ |
| I | ಕುಶಲರು | | | | | | |
| 1 | ಕಂಪೋಸಿಟರ್ | 422–00 | 10972–00 | 420–00 | 10920–00 | 392–00 | 10192–00 |
| 2 | ಪ್ರಿಂಟರ್ | | | | | | |
| 3 | ಬೈಂಡರ್ | | | | | | |
| 4 | ಮೋನೋ ಕಾಸ್ಟರ್ | | | | | | |
| 5 | ಟೈಪ್ ಕಾಸ್ಟರ್ | | | | | | |
| 6 | ಬ್ಲಾಕ್ ಮೇಕರ್ | | | | | | |
| 7 | ಕರಡು ಓದುವವರು | | | | | | |
| 8 | ಸಿಲಿಂಡರ್ ಮ್ಯಾನ್ | | | | | | |
| 9 | ಪ್ರೋಸಸ್ ಎನ್‌ಗ್ರೇವರ್ | | | | | | |
| 10 | ಟ್ರೆಡ್ಲೆ ಪ್ರೆಸ್ ಮ್ಯಾನ್ ಪ್ಲೇಟ್ ಮ್ಯಾನ್ | | | | | | |
| 11 | ಡಾರ್ಕ್ ರೂಂಸಹಾಯಕ | | | | | | |
| II | ಅರೆ ಕುಶಲರು | | | | | | |
| 1 | ರೂಲಿಂಗ್ ಫೀಡರ್ | 417–00 | 10842–00 | 415–00 | 10790–00 | 387–00 | 10062–00 |
| 2 | ಲೆಟರ್ ಪ್ರೆಸ್ ಫೀಡರ್ | | | | | | |
| 3 | ಪರೀಕ್ಷಿಸುವವರು | | | | | | |
| 4 | ಪ್ಯಾಕರ್ಸ್ | | | | | | |
| 5 | ಪರ್‌ಪೋರೇಟರ್ | | | | | | |
| 6 | ಕತ್ತರಿಸುವವರು: ಹೊಲಿಯುವವರು: ಮುದ್ರಿಸುವವರು | | | | | | |
| 7 | ಹೊಲಿಗೆ ಯಂತ್ರದ ಕೆಲಸದವರು | | | | | | |
| 8 | ಕುಶಲ ಕೆಲಸ ಗಾರರಿಗೆ ಸಹಾಯಕ | | | | | | |
| III | ಕುಶಲರಲ್ಲದವರು | | | | | | |
| 1. | ಕ್ಲೀನರ್ ಮತ್ತು ಹಲಲ್ದಾರ್ | 385–00 | 10010–00 | 375–00 | 9750–00 | 350–00 | 9100–00 |
| 2. | ಸ್ವೀಪರ್/ಹೆಲ್ಪರ್ | | | | | | |
| 3. | ಕುಶಲರಲ್ಲದ ಇತರೇ ಕಾರ್ಮಿಕರು | | | | | | |
| IV | ಕಛೇರಿ ಸಿಬ್ಬಂದಿ | | | | | | |
| 1. | ಮ್ಯಾನೇಜರ್/ ಪರ್ಸನಲ್ ಆಫೀಸರ್ | 511–00 | 13286–00 | 497–00 | 12922–00 | 464–00 | 12064–00 |
| 2. | ಅಸಿಸ್ಟೆಂಟ್ ಮ್ಯಾನೇಜರ್/ಅಸಿಸ್ಟೆಂಟ್ ಪರ್ಸನಲ್ ಮ್ಯಾನೇಜರ್ | 494–00 | 12844–00 | 481–00 | 12506–00 | 449–00 | 11674–00 |
| 3. | ಅಕೌಂಟೆಂಟ್ | 476–00 | 12376–00 | 464–00 | 12064–00 | 433–00 | 11258–00 |
| 4. | ಕ್ಯಾಷಿಯರ್/ಸೀನಿಯರ್ ಕ್ಲರ್ಕ | 467–00 | 12142–00 | 455–00 | 11830–00 | 425–00 | 11050–00 |
| 5. | ಶೀಘ್ರಲಿಪಿಗಾರ/ಕಂಪ್ಯೂಟರ್ ಆಪರೇಟರ್ | 467–00 | 12142–00 | 455–00 | 11830–00 | 425–00 | 11050–00 |

